

# ಕರ್ನಾಟಕ ವಿಧಾನ ಪರಿಷತ್ತು

ನೂರ ನಲವತ್ತ ಮೂರನೆಯ ಅಧಿವೇಶನದ ಮುಂದುವರೆದ ಉಪವೇಶನ

**ಚುಕ್ಕೆ ರಹಿತ ಪ್ರಶ್ನೆ**

ದಿನಾಂಕ : 12-03-2021 ಪ್ರಶ್ನೆ ಸಂಖ್ಯೆ : 865 (1117)

ಸದಸ್ಯರ ಹೆಸರು ಮತ್ತು ಕ್ಷೇತ್ರ : ಶ್ರೀ ಕವಟಗಿಮಠ ಮಹಾಂತೇಶ ಮಲ್ಲಿಕಾರ್ಜುನ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ)

ಉತ್ತರ ನೀಡಬೇಕಾದ ದಿನಾಂಕ : 12-03-2021

ಉತ್ತರಿಸುವ ಸಚಿವರು : ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರು

ವಿಷಯ : "ಗ್ರಾಮೀಣ ಸುಮಾರ್ಗ ಯೋಜನೆ" ಬಗ್ಗೆ

(ಅ) ರಾಜ್ಯದ ಗ್ರಾಮೀಣ ಭಾಗಗಳ ರಸ್ತೆಗಳ ಸುಧಾರಣೆಗೆ ಘೋಷಿಸಲಾಗಿದ್ದ "ಗ್ರಾಮೀಣ ಸುಮಾರ್ಗ ಯೋಜನೆ"ಯು ಪ್ರಗತಿ ಕಾಣದಿರಲು ಕಾರಣಗಳೇನು ;

(ಆ) ಸದರಿ ಯೋಜನೆಯ ಅನುಷ್ಠಾನಕ್ಕಾಗಿ ಹಂಚಿಕೆಯಾಗಿರುವ ಹಣವೆಷ್ಟು ;

(ಇ) ಈ ಯೋಜನೆಯ ಮುಂದುವರಿಕೆಗೆ ಆರ್ಥಿಕ ಲಭ್ಯತೆಯ ಕೊರತೆ ಕಾರಣವೆಂದು ವರದಿಯಾಗಿದ್ದು, ಈ ಬಗ್ಗೆ ಸರ್ಕಾರ ಕೈಗೊಂಡ ಕ್ರಮಗಳೇನು ;

(ಈ) ರಾಜ್ಯದಲ್ಲಿ ಈವರೆಗೆ ಈ ಯೋಜನೆಯಡಿ ಎಷ್ಟು ಕಿ.ಮೀ. ರಸ್ತೆ ಪ್ರಗತಿಗೊಂಡಿದೆ ;

(ಉ) ಬೆಳಗಾವಿ ಜಿಲ್ಲೆಯಲ್ಲಿ ಗ್ರಾಮೀಣ ಸುಮಾರ್ಗ ಯೋಜನೆಯಡಿಯಲ್ಲಿ ಬಳಕೆಯಾದ ಅನುದಾನವೆಷ್ಟು ; ಎಷ್ಟು ಕಿ.ಮೀ. ರಸ್ತೆ ಅಭಿವೃದ್ಧಿಗೊಂಡಿದೆ ?